## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 698 (764)
ಸದಸ್ಯರ ಹೆಸರು : ಶ್ರೀ ಡಾ.ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 20.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಮತ್ತು ಮೈಸೂರು ವಿಭಾಗದಲ್ಲಿ ಸರ್ಕಾರಿ ಪ್ರೌಢ ಶಾಲಾ ಸಹ ಶಿಕ್ಷಕರಿಗೆ ಮುಖ್ಯೋಪಾಧ್ಯಾಯರ ಹುದ್ದೆಗೆ ಬಡ್ತಿಯನ್ನು ಕಾಲ ಕಾಲಕ್ಕೆ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಕಳೆದ 3 ವರ್ಷಗಳಲ್ಲಿ ಬಡ್ತಿ ನೀಡಿರುವ ಪ್ರಕ್ರಿಯೆಗಳ ವಿವರಗಳನ್ನು ನೀಡುವುದು. | ಸರ್ಕಾರಿ ಪ್ರೌಢ ಶಾಲಾ ಮುಖ್ಯ ಶಿಕ್ಷಕರ ಹಾಗೂ ತತ್ಸಮಾನ ವೃಂದದ ಖಾಲಿ ಹುದ್ದೆಗಳಿಗೆ 2019-20 ಹಾಗೂ 2020-21ನೇ ಸಾಲಿನಲ್ಲಿ ಈ ಕೆಳಕಂಡಂತೆ ಬೆಂಗಳೂರು ಹಾಗೂ ಮೈಸೂರು ವಿಭಾಗಗಳಲ್ಲಿನ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರಿಗೆ ಮುಖ್ಯ ಶಿಕ್ಷಕರು ಹಾಗೂ ತತ್ಸಮಾನ 'ಬಿ' ವೃಂದದ ಹುದ್ದೆಗಳಿಗೆ ಮುಂಬಡ್ತಿ ನೀಡಿ ಸ್ಥಳ ನಿಯುಕ್ತಿಗೊಳಿಸಿದೆ. |
| ಆ) | ಮೇಲ್ಕಂಡ ವಿಭಾಗಗಳಲ್ಲಿ ಖಾಲಿ ಇರುವ ಮುಖ್ಯೋಪಾಧ್ಯಾಯರ ಹುದ್ದೆಗಳಿಗೆ ಬಡ್ತಿ ನೀಡಲು ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗಿದೆಯೇ, ತಯಾರಿಸಿದ್ದಲ್ಲಿ ಇದುವರೆವಿಗೂ ಸದರಿ ಹುದ್ದೆಗಳಿಗೆ ಬಡ್ತಿ ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು? | ಬೆಂಗಳೂರು ಹಾಗೂ ಮೈಸೂರು ವಿಭಾಗದ ಸರ್ಕಾರಿ ಪ್ರೌಢ ಶಾಲಾ ಸಹ ಶಿಕ್ಷಕರು ಗ್ರೇಡ್-2 ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.01.2021 ರಲ್ಲಿ ಇದ್ದಂತೆ ಕ್ರಮವಾಗಿ ದಿನಾಂಕ:06.11.2021 ಮತ್ತು ದಿನಾಂಕ:10.11.2021 ರಂದು ಪ್ರಕಟಿಸಲಾಗಿದೆ. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಭಾಧಿತರು ಆಕ್ಷೇಪಣೆಯನ್ನು ಸಲ್ಲಿಸಿದ್ದು, ಸದರಿ ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಕಾಲಕಾಲಕ್ಕೆ ಮುಖ್ಯೋಪಾಧ್ಯಾಯರ ಹುದ್ದೆಗೆ ಬಡ್ತಿ ನೀಡಲು ಕ್ರಮಕೈಗೊಳ್ಳಲಾಗುತ್ತಿದೆ. |

| ಅವಧಿ | ಬೆಂಗಳೂರು ವಿಭಾಗ | ಮೈಸೂರು ವಿಭಾಗ | ಒಟ್ಟು |
|---|---|---|---|
| 2018-19 | ಬಡ್ತಿ ನೀಡಿರುವುದಿಲ್ಲ | | |
| 2019-20 | 234 | 347 | 581 |
| 2020-21 | 50 | 70 | 120 |
| ಒಟ್ಟು | 290 | 417 | 707 |

**ಸಂಖ್ಯೆ: ಇಪಿ 163 ಎಸ್‌ಓಹೆಚ್ 2021**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು